



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರಿ

ಹೊಂಗನಸು – 46

| ಸಂಪುಟ: ೦೫ ಸಂಚಿಕೆ: ೮ | ನವೆಂಬರ್ ೨೦೧೮ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 05 Issue 8 | November 2018 | Pages - 8 | A. Sub. - Rs. 20/- | Editor : Sri. B.R. Ravindranath |




**ಚಂದಾ ವಿವರಗಳು**

ವಾರ್ಷಿಕ ಚಂದಾ
ರೂ. ೨೦/–
ಐದು ವರ್ಷಗಳ ಚಂದಾ
ರೂ. ೧೦೦/–


ವಿಳಾಸ

ಬಿ.ಎಂ.ಶ್ರೀ. ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೮
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org

ಕಛೇರಿ ಸಮಯ:
ಮಧ್ಯಾಹ್ನ 12–30ರಿಂದ ಸಂಜೆ 7–30ಗಂಟೆ.
ವಾರದ ರಜೆ: ಮಂಗಳವಾರ




## ಕನ್ನಡ ರಾಜ್ಯೋತ್ಸವದ ಶುಭಾಶಯಗಳು

## ಸಾಹಿತ್ಯ ಸಂಚಲನ ಕಾರ್ಯಕ್ರಮ –೩

ಮುಖ್ಯ ಅತಿಥಿ : ಡಾ. ಕೆ.ಆರ್. ಸಂಧ್ಯಾರೆಡ್ಡಿ, ಖ್ಯಾತ ಸಾಹಿತಿಗಳು ಮತ್ತು ಜಾನಪದ ತಜ್ಞರು

ಉಪನ್ಯಾಸದ ವಿಷಯ : ಫಿನ್ನಿಶ್ ಮಹಾಕಾವ್ಯ 'ಕಲೆವಲ'ದ ಅನುವಾದವನ್ನು ಕುರಿತು

ಕರ್ನಾಟಕ ಲೇಖಕಿಯರ ಸಂಘವು ಬಿಎಂಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ ನಡೆಸುತ್ತಿರುವ 'ಸಾಹಿತ್ಯ ಸಂಚಲನ'ದ ಮೂರನೆಯ ಕಾರ್ಯಕ್ರಮದಲ್ಲಿ, ಸೆಪ್ಟೆಂಬರ್ ೧೯ನೆಯ ದಿನಾಂಕದಂದು ಡಾ.ಕೆ.ಆರ್.ಸಂಧ್ಯಾ ರೆಡ್ಡಿಯವರು ಫಿನ್‌ಲ್ಯಾಂಡಿನ ಮಹಾಕಾವ್ಯ 'ಕಲೆವಲ' ವನ್ನು ಅನುವಾದ ಮಾಡಿದ ಸಂದರ್ಭದಲ್ಲಿ ತಮಗಾದ ಅನುಭವಗಳನ್ನು ಕುರಿತು ಉಪನ್ಯಾಸ ನೀಡಿದರು.

ಡಾ. ಆರ್. ಲಕ್ಷ್ಮೀನಾರಾಯಣರವರು ಪ್ರಾಸ್ತಾವಿಕ ನುಡಿಗಳನ್ನಾಡುತ್ತಾ ಕಲೆವಲದ ನಾಯಕ ಒಬ್ಬ ಧೀರ, ಆದಿ ಚಾರಣಿಗ ಮತ್ತು ಸಂಗೀತಕಾರ. ಅವನಿದ್ದ ಊರು ಕಲೆವಲ.ಅಂತಾರಾಷ್ಟ್ರೀಯ ಪ್ರಖ್ಯಾತವಾಗಿರುವ ಈ ಕಾವ್ಯ ಜಗತ್ತಿನ ಹಲವಾರು ಭಾಷೆಗಳಿಗೆ ಅನುವಾದಗೊಂಡಿದೆ; ಜಾನಪದ ತಜ್ಞೆ ಹಾಗೂ ಕವಯತ್ರಿಯಾದ ಸಂಧ್ಯಾರೆಡ್ಡಿಯವರು ೩೩ ಅಧ್ಯಾಯಗಳುಳ್ಳ ಫಿನ್‌ಲ್ಯಾಂಡಿನ ಜಾನಪದ ಮಹಾಕಾವ್ಯವನ್ನು ಕಾವ್ಯಾನುವಾದ ಮಾಡಿರುವುದು ಹೆಗ್ಗಳಿಕೆಯ ವಿಷಯ. ಇಂಗ್ಲಿಷ್‌ನಿಂದ ಕನ್ನಡಕ್ಕೆ ಅನುವಾದಿಸಿ ಕನ್ನಡದ ಓದುಗರಿಗೆ ಪರಿಚಯಿಸಿದ್ದಾರೆ ಎಂದು ಹೇಳಿದರು.

ಡಾ. ಸಂಧ್ಯಾ ರೆಡ್ಡಿಯವರು ಕಲೆವಲ ಫಿನ್ಲ್ಯಾಂಡ್ ದೇಶದ ಜಾನಪದ ಮಹಾಕಾವ್ಯ.ಇದು ಅನೇಕ ವಿಚಾರಗಳಲ್ಲಿ ನಮ್ಮ ದೇಶದ ಮಂಟೆಸ್ವಾಮಿ ಮತ್ತು ಮಲೆಮಹದೇಶ್ವರ ಕಾವ್ಯಗಳನ್ನು ಹೋಲುತ್ತದೆ ಎಂದು ಹೇಳಿದರು.ಕಲೆವಲದ ಕಥೆಯನ್ನು ಸಭಿಕರಿಗೆ ತಿಳಿಸುತ್ತಾ, ಕನ್ನಡಾನುವಾದದ ಕೆಲವು ಭಾಗಗಳನ್ನು ಓದಿ, ಅದರ ಸೊಬಗನ್ನು ವಿವರಿಸಿದರು. ಹರಿವ ರಕ್ತಕ್ಕೊಂದು ಮನವಿ ಎಂಬ ಭಾಗ ಬಹಳ ಮನೋಜ್ಞವಾಗಿದ್ದು ತಮಗೆ ಬಹಳ ಮೆಚ್ಚುಗೆಯಾದ ಭಾಗ ಎಂದು ನುಡಿದರು. ಫಿನ್‌ಲ್ಯಾಂಡಿನ ಅನೇಕ ಪದ್ಧತಿಗಳು ಭಾರತ ದೇಶದ ಸಂಸ್ಕೃತಿಗೆ ಸಮಾನವಾಗಿವೆ ಎಂದು ಹೇಳಿ, ವಿಶೇಷವಾಗಿ ವಧುವಿಗೆ ಹೇಳುವ ಕಿವಿಮಾತುಗಳನ್ನು ಉಲ್ಲೇಖಿಸಿದರು.ಇಂತಹ ಕಾವ್ಯವನ್ನು ಅನುವಾದಿಸುವಾಗ ಅನುವಾದಕರು ಅನುಸರಿಸಬೇಕಾದ ಎಚ್ಚರಿಕೆಯ ಬಗ್ಗೆಯೂ ಅವರು ತಿಳಿಸಿದರು.

ಸಭೆಯ ಅಧ್ಯಕ್ಷತೆ ವಹಿಸಿದ್ದ ಲೇಖಕಿಯರ ಸಂಘದ ಅಧ್ಯಕ್ಷೆ ವನಮಾಲಾ ಸಂಪನ್ನ ಕುಮಾರರವರು ಅನುವಾದದ ಕೆಲಸ ಅತ್ಯಂತ ವಿಶಿಷ್ಟವಾದುದು.ಹಲವಾರು ಸಾಹಿತ್ಯ ಪ್ರಕಾರಗಳಲ್ಲಿ ಕೆಲಸ ಮಾಡಿರುವ ಸಂಧ್ಯಾರವರ ಪ್ರತಿಭೆಯನ್ನೂ ಹಾಗೂ ಇತರ ಲೇಖಕಿಯರನ್ನೂ ಗುರುತಿಸುವುದು ನಮ್ಮ ಹೊಣೆ ಎಂದು ನುಡಿದರು.




ಕಾರ್ಯಕ್ರಮದಲ್ಲಿ ಸಂಘದ ಕಾರ್ಯದರ್ಶಿ ನಾಗರತ್ನ ಚಂದ್ರಶೇಖರ್‌ರವರು ಸಭೆಗೆ ಸ್ವಾಗತ ಕೋರಿದರು. ಸಹ ಕಾರ್ಯದರ್ಶಿ ಜಿ.ವಿ.ನಿರ್ಮಲರವರು ಉಪನ್ಯಾಸಕಿ ಡಾ.ಕೆ. ಆರ್.ಸಂಧ್ಯಾ ರೆಡ್ಡಿಯವರನ್ನು ಸಭೆಗೆ ಪರಿಚಯಿಸಿದರು. ಕಾರ್ಯಕ್ರಮವನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹಕಾರದೊಂದಿಗೆ ಆಯೋಜಿಸಲಾಗಿತ್ತು.

## ಸಂಪಾದಕೀಯ

ನವೆಂಬರ್ ತಿಂಗಳಿನಲ್ಲಿ ಕರ್ನಾಟಕದ ನಾಡು ನುಡಿ ಬಗ್ಗೆ ಎಲ್ಲರಿಗೂ ಹೆಚ್ಚು ಆಸಕ್ತಿ ಮೂಡುತ್ತದೆ. ಎಲ್ಲೆಲ್ಲೂ ಹಬ್ಬದ ವಾತಾವರಣ ನಿರ್ಮಾಣವಾಗುತ್ತದೆ. ಈ ಬಾರಿಯೂ ನಾವೆಲ್ಲರೂ ವಿಜೃಂಭಣೆಯಿಂದಆಚರಿಸುವ ರಾಜ್ಯೋತ್ಸವದ ಕಾರ್ಯಕ್ರಮಗಳು ಯಶಸ್ವಿಗೊಳ್ಳಲಿ ಎಂದು ಹಾರೈಸುತ್ತೇವೆ.

ಬಿ.ಆರ್ ರವೀಂದ್ರನಾಥ್
ಸಂಪಾದಕರು

## ಪ್ರೊ. ನೈಷಧಂ ಎಸ್ಸೆ ಹಾಗೂ ಶ್ರೀಧರ ಬನವಾಸಿ ಅವರಿಗೆ ಶಾ. ಬಾಲೂರಾವ್ ಪ್ರಶಸ್ತಿಗಳು

ಪ್ರತಿವರ್ಷ ಬಿಎಂಶ್ರೀ ಪ್ರತಿಷ್ಠಾನವು ಕೊಡಮಾಡುವ 'ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ'ಗೆ ಶ್ರೀ ಶ್ರೀಧರ ಬನವಾಸಿ ಅವರ 'ಬೇರು' ಕೃತಿಯನ್ನೂ, 'ಶಾ. ಬಾಲೂರಾವ್ ಅನುವಾದ ಪ್ರಶಸ್ತಿ'ಗೆ ಪ್ರೊ. ನೈಷಧಂ ಎಸ್ಸೆ ಅವರ 'ಸಿದ್ಧಾರ್ಥ' ಅನುವಾದ ಕೃತಿಯನ್ನೂ ೨೦೧೭ರಲ್ಲಿ ಮೊದಲ ಮುದ್ರಣವಾಗಿ ಪ್ರಕಟಗೊಂಡವುಗಳಲ್ಲಿ ಶ್ರೇಷ್ಠ ಕೃತಿಗಳೆಂದು ಆಯ್ಕೆ ಸಮಿತಿಯು ಆಯ್ಕೆ ಮಾಡಿದೆ. ಪ್ರತಿ ಪ್ರಶಸ್ತಿಯೂ ರೂ. ೨೫,೦೦೦/- ನಗದು ಹಾಗೂ ಸ್ಮರಣಿಕೆಯನ್ನು ಒಳಗೊಂಡಿರುತ್ತದೆ. ಈ ಪ್ರಶಸ್ತಿ ಪ್ರದಾನ ಸಮಾರಂಭವು ನವೆಂಬರ್ ೧೧, ೨೦೧೮ರಂದು ಭಾನುವಾರ ಬೆಳಿಗ್ಗೆ ೧೧-೦೦ ಗಂಟೆಗೆ ಪ್ರತಿಷ್ಠಾನದ ಎಂ.ವಿ.ಸೀ ಸಭಾಂಗಣದಲ್ಲಿ ನೆರವೇರಲಿದೆ. ಪ್ರೊ॥ ದಾಮೋದರ ಶೆಟ್ಟಿ ಅವರು ಸಮಾರಂಭದ ಅಧ್ಯಕ್ಷತೆ ವಹಿಸಿ ಪ್ರಶಸ್ತಿ ಪ್ರದಾನ ಮಾಡಲಿದ್ದಾರೆ.

### ನವೆಂಬರ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಶಿ.ಶಿ. ಬಸವನಾಳ | ೩-೧೧-೧೮೯೩ |
| ಸಂಶಿಭೂಸನೂರ ಮಠ | ೭-೧೧-೧೯೧೦ |
| ರಾಶಿ- ಡಾಎಂ ಶಿವರಾಂ | ೧೦-೧೧-೧೯೦೫ |
| ತಿರುಮಲೆ ರಾಜಮ್ಮ | ೨೦-೧೧-೧೯೦೦ |
| ಎಂ. ಎಸ್. ಪುಟ್ಟಣ್ಣ | ೨೧-೧೧-೧೮೫೪ |
| ತೀನಂ ಶ್ರೀಕಂಠಯ್ಯ | ೨೬-೧೧-೧೯೦೬ |
| ಬಿ.ಸಿ. ರಾಮಚಂದ್ರ ಶರ್ಮಾ | ೨೮-೧೧-೧೯೨೫ |
| ಎಂ.ಎಂ. ಕಲಬುರ್ಗಿ | ೨೮-೧೧-೧೯೩೮ |

### ನವೆಂಬರ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಬಿ.ಜಿ. ಎಲ್. ಸ್ವಾಮಿ | ೨-೧೧-೧೯೮೦ |
| ಸಂಶಿಭೂಸನೂರ ಮಠ | ೬-೧೧-೧೯೯೧ |
| ದಿನಕರ ದೇಸಾಯಿ | ೭-೧೧-೧೯೮೨ |
| ಕುವೆಂಪು | ೧೦-೧೧-೧೯೯೪ |
| ಹಾ.ಮಾ. ನಾಯಕ್ | ೧೦-೧೧-೨೦೦೦ |
| ಎಂ. ಗೋಪಾಲಕೃಷ್ಣ ಅಡಿಗ | ೧೪-೧೧-೧೯೯೨ |
| ಟಿ.ಪಿ. ಕೈಲಾಸಂ | ೨೩-೧೧-೧೯೪೬ |

## ಬಿ.ಜಿ. ಕುಸುಮ ಸಾಮಾಜಿಕ ಸೇವಾಟ್ರಸ್ಟ್(ರಿ) ದತ್ತಿ ಸ್ಥಾಪಕರು

**ಶ್ರೀಮತಿ ಬಿ.ಜಿ. ಕುಸುಮ**

ಹುಟ್ಟಿದ ತಾರೀಖು:- ೧೭-೦೨-೧೯೩೩,

ವಿದ್ಯಾಭ್ಯಾಸ:- ಬಿ.ಎಸ್.ಸಿ, ಬಿ.ಎಡ್., ಹಿಂದೀ ರಾಷ್ಟ್ರಭಾಷಾವಿಶಾರದ, ಸಂಸ್ಕೃತ ಕೋವಿದ, ಪೋಸ್ಟ್‌ಗ್ರಾಜುಯೇಟ್ ಡಿಪ್ಲೊಮೊ ಇನ್ ಹೋಂಸೈನ್ಸ್,

ಉದ್ಯೋಗ:- ಬೆಂಗಳೂರು ನಗರದ ಆಚಾರ್ಯ ಪಾಠಶಾಲಾ ಗರ್ಲ್ಸ್ ಹೈಸ್ಕೂಲಿನಲ್ಲಿ ವಿಜ್ಞಾನ ಮತ್ತು ಗಣಿತ ಶಿಕ್ಷಕಿಯಾಗಿ ವೃತ್ತಿ ಆರಂಭಿಸಿ, ಅದೇ ಶಾಲೆಯ ಮುಖ್ಯೋಪಾಧ್ಯಾಯಿನಿಯಾಗಿ ನಿವೃತ್ತಿ.

ಹವ್ಯಾಸ, ಚಟುವಟಿಕೆಗಳು:-

* ಆಕಾಶವಾಣಿಗೆ ಲೇಖನಗಳು, ವಿವಿಧ ವಿಷಯಗಳ ಬಗ್ಗೆ ರೂಪಕಗಳು, ನಾಟಕಗಳು, ಉಪನ್ಯಾಸಗಳನ್ನು ನೀಡಿರುತ್ತಾರೆ.
* ನಾಡಿನಎಲ್ಲಾ ಪತ್ರಿಕೆಗಳಲ್ಲಿ ಲೇಖನ, ಕತೆಗಳು ಪ್ರಕಟವಾಗಿವೆ.
* ವಿಜ್ಞಾನಕ್ಕಾಗಿಯೇ ಮೀಸಲಾದ "ಬಾಲವಿಜ್ಞಾನ" ಪತ್ರಿಕೆಯಲ್ಲಿ ಅನೇಕ ಲೇಖನಗಳು ಪ್ರಕಟವಾಗಿವೆ.
* ಇವರಕೃತಿಗಳು : "ದೀಪಧಾರಿಣಿ", "ವಿಜ್ಞಾನ ವಿಹಾರ", "ತಮಾಷೆತಲೆ", "ಮಹಾಕಾವ್ಯಗಳಲ್ಲಿ ರಸಪ್ರಸಂಗಗಳು" ಮತ್ತು "ಚಿಟ್ಟೆಯತೀರ್ಪು" (ಮಕ್ಕಳಪುಸ್ತಕ).
* "ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ" ಸದಸ್ಯರಾಗಿ, ೧೯೮೦ರ ದಶಕದಲ್ಲಿ ಧಾರವಾಡದಲ್ಲಿ ನಡೆದ ಅಖಿಲ ಭಾರತ ವಿಜ್ಞಾನ ಸಮ್ಮೇಳನದಲ್ಲಿ ಡಾ॥ ಶಿವರಾಮಕಾರಂತರೊಂದಿಗೆ ಒಂದೇ ವೇದಿಕೆಯಲ್ಲಿ ಪ್ರಬಂಧ ಮಂಡನೆ.
* ೧೯೮೫ ರ ಆಗಸ್ಟ್‌ನಲ್ಲಿ ನಡೆದ ಐ.ಸಿ.ಎಸ್.ಯು. (ಇಂಟರ್ ನ್ಯಾಷನಲ್ ಕೌಂನ್ಸಿಲ್ ಆಫ್ ಸೈಂಟಿಫಿಕ್ ಯೂನಿಯನ್ಸ್)ನ ಅಂತರಾಷ್ಟೀಯ ಸಮಾವೇಶದಲ್ಲಿ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತನ್ನು ಪ್ರತಿನಿಧಿಸಿ, "Strategies for teaching Science in Schools" ಎಂಬ ಪ್ರಬಂಧ ಮಂಡನೆ ಮಾಡಿರುತ್ತಾರೆ. ಇದು ಯು. ಎಸ್.ಎ. ನಲ್ಲಿ ಪ್ರಕಟವಾಗಿವೆ.
* ನಿವೃತ್ತಿಯ ನಂತರ ನ್ಯಾಷನಲ್‌ಕಾಲೇಜಿನ 'ಬೆಂಗಳೂರು ಸೈನ್ಸ್ ಫೋರಂ' ನಲ್ಲಿ ೧೯೯೧ ರಿಂದ ಸತತ ೨೫ ವರ್ಷಗಳು ಹೈಸ್ಕೂಲ್‌ಗೆ ಪ್ರವೇಶ ಪಡೆಯುವ ವಿದ್ಯಾರ್ಥಿಗಳಿಗಾಗಿ ನೂತನ ವಿಧಾನದ ವಿಜ್ಞಾನ ತರಗತಿಗಳ ನಿರ್ದೇಶಕಳಾಗಿ ಕಾರ್ಯ ನಿರ್ವಹಿಸಿರುತ್ತಾರೆ.
* ನಿವೃತ್ತಿಯ ನಂತರ ಗಮಕ ಕ್ಷೇತ್ರಕ್ಕೆ ಕಾಲಿಟ್ಟು, ಕಾವ್ಯ ವಾಚನಗಳಿಗೆ ವ್ಯಾಖ್ಯಾನ ನಡೆಸಿರುತ್ತಾರೆ. ಅನೇಕ ಕಡೆಗಳಲ್ಲಿ ಬೇರೆ ಬೇರೆ ಕಾವ್ಯಗಳಿಗೆ, ಬೇರೆ ಬೇರೆ ಗಮಕಿಗಳಿಗೆ ವ್ಯಾಖ್ಯಾನ ಮಾಡಿರುತ್ತಾರೆ. ಆಕಾಶವಾಣಿಯಲ್ಲಿ ಕುವೆಂಪು ಶತಮಾನೋತ್ಸವದ ಅಂಗವಾಗಿ ನಡೆದ "ಶ್ರೀ ರಾಮಾಯಣ ದರ್ಶನಂ" ಕಾವ್ಯಕ್ಕೆ ಸರಣಿಯಲ್ಲಿಆರು ಸಲ ವ್ಯಾಖ್ಯಾನ ನಡೆಸಿಕೊಟ್ಟಿರುತ್ತಾರೆ. ಮೈಸೂರಿನ ಗಣಪತಿ ಸಚ್ಚಿದಾನಂದ ಆಶ್ರಮದವರು ಪ್ರಕಟಿಸಿರುವ ಶ್ರೀ ದತ್ತಾತ್ರೇಯ ಚರಿತ್ರೆಗೂ ವ್ಯಾಖ್ಯಾನ ನಡೆಸಿಕೊಟ್ಟಿರುತ್ತಾರೆ.

ಪ್ರಶಸ್ತಿಗಳು:-ಎನ್.ಎಂ.ಕೆ.ಆರ್.ವಿ. ಯ ಶಾಶ್ವತೀ ಸಂಸ್ಥೆ ಕೊಡುವ ಗಾರ್ಗಿ ಪ್ರಶಸ್ತಿ, ಜ್ಯೋತಿ ವಿದ್ಯಾಕೇಂದ್ರ ಪ್ರಶಸ್ತಿ, ದೆಹಲಿಯ NCERTಯು ಕೊಡುವ ಶಿಕ್ಷಣದಲ್ಲಿ ಸಂಶೋಧನೆಯ ಪ್ರಶಸ್ತಿ, ಕರ್ನಾಟಕ ಲೇಖಕಿಯರ ಸಂಘದಿಂದ ವಿಶಿಷ್ಟ ಲೇಖಕಿ ಪ್ರಶಸ್ತಿ, ಪದ್ಮನಾಭನಗರ ಗಮಕ ಸಂಘದಿಂದ ವ್ಯಾಖ್ಯಾನ ವಿಶಾರದೆ" ಪ್ರಶಸ್ತಿ, ಬೆಂಗಳೂರಿನ ಲಯನ್ಸ್ ಕ್ಲಬ್‌ನ ಪ್ರಶಸ್ತಿ, ಇತ್ಯಾದಿ. ಕರ್ನಾಟಕ ಗಮಕ ಕಲಾ ಪರಿಷತ್ತು ಸಂಸ್ಥಾಪನಾ ದಿನಾಚರಣೆಯಂದು "ಕಲಾವತಂಸ" ಎಂಬ ಪ್ರಶಸ್ತಿ ನೀಡಿ ಸನ್ಮಾನಿಸಿದ್ದಾರೆ.

# ನವೆಂಬರ್ ೨೦೧೮ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು
## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಪ್ರತಿಷ್ಠಾನ

### ೧೧-೧೧-೨೦೧೮ ಭಾನುವಾರ ಬೆಳಿಗ್ಗೆ – ೧೦-೩೦ ಗಂಟೆಗೆ

**ಶಾ. ಬಾಲೂರಾವ್ ಪ್ರಶಸ್ತಿಗಳು**

ಅಧ್ಯಕ್ಷತೆ ಮತ್ತು ಪ್ರಶಸ್ತಿ ಪ್ರದಾನ: ಡಾ. ನಾ.ದಾಮೋದರ ಶೆಟ್ಟಿ, ನಿವೃತ್ತ ಪ್ರಾಧ್ಯಾಪಕರು ಹಾಗೂ ಖ್ಯಾತ ಲೇಖಕರು

**ಪ್ರಶಸ್ತಿ ಪುರಸ್ಕೃತರು:**

ಯುವ ಬರಹಗಾರ ಪ್ರಶಸ್ತಿ : ಶ್ರೀ ಶ್ರೀಧರ ಬನವಾಸಿ

ಶಾ. ಬಾಲೂರಾವ್ಅನುವಾದ ಪ್ರಶಸ್ತಿ : ಪ್ರೊ. ನೈಷಧಂಎಸ್ಸೆ

### ೧೯-೧೧-೨೦೧೮ ಸೋಮವಾರ ಸಂಜೆ– ೬-೦೦ಗಂಟೆಗೆ



**"ಅಕ್ಕರಗೊಟ್ಟಿ"**

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : ಇಂದಿನ ಸಾಹಿತ್ಯದ ಸವಾಲುಗಳು

**ಚಾಲನೆ : ಡಾ॥ ನೈಷಧಂ ಎಸ್ಸೆ**

ನಿವೃತ್ತ ಅಧ್ಯಾಪಕರು ಹಾಗೂ ಖ್ಯಾತ ಲೇಖಕರು

### ೨೧-೧೧-೨೦೧೮ ಬುಧವಾರ ಸಂಜೆ ೪-೦೦ಗಂಟೆಗೆ



**ಸಾಹಿತ್ಯ ಸಂಚಲನ**

ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ

ಕರ್ನಾಟಕ ಲೇಖಕಿಯರ ಸಂಘದ ಕಾರ್ಯಕ್ರಮ

**ಮುಖ್ಯ ಅತಿಥಿ : ಶ್ರೀಮತಿ ಎನ್. ಶ್ರೀಮತಿ ಜಯರಾಂ**

ಸಂಗೀತ ಮತ್ತು ಗಮಕ ವಿದುಷಿ

ಉಪನ್ಯಾಸದ ವಿಷಯ : ಗಮಕ ಕಲೆ – ಸಾಹಿತ್ಯ ಪ್ರಸಾರ



### ೧೫-೧೧-೨೦೧೮ ಗುರವಾರ ಸಂಜೆ – ೬-೦೦ ಗಂಟೆಗೆ

**ಬಿ.ಜಿ. ಕುಸುಮ ಸಾಮಾಜಿಕ ಸೇವಾ ಟ್ರಸ್ಟ್ (ರಿ) ದತ್ತಿ ಕಾರ್ಯಕ್ರಮ**

**ಡಾ. ಸಿ.ವಿ.ರಾಮನ್ ಸ್ಮಾರಕ ವಿಜ್ಞಾನ ಉಪನ್ಯಾಸ**

ಉಪನ್ಯಾಸ: ಪ್ರೊ॥ ಎಂ. ಆರ್. ನಾಗರಾಜು

(ನಿವೃತ್ತ ಪ್ರಾಧ್ಯಾಪಕರು, ವಿಜ್ಞಾನ ಲೇಖಕರು)

ವಿಷಯ : **ಅಲಕ್ಷ್ಯದ ಸುಳಿಯಲ್ಲಿ ವಿಜ್ಞಾನ ಮತ್ತು ಸಾಹಿತ್ಯ**




### ೨೩-೧೧-೨೦೧೮ ಶುಕ್ರವಾರ ಸಂಜೆ೬-೦೦ ಗಂಟೆಗೆ

**ಮಹಾತ್ಮಗಾಂಧಿ– ೧೫೦**

ಉಪನ್ಯಾಸ: ಡಾ. ಎ. ನಾರಾಯಣ

ಖ್ಯಾತ ಪತ್ರಕರ್ತರು, ಅಧ್ಯಾಪಕರು ಹಾಗೂ ಕಾರ್ಯಕ್ರಮ ಸಂಯೋಜಕರು, ಅಜೀಂ ಪ್ರೇಂಜೀ ವಿಶ್ವವಿದ್ಯಾನಿಲಯ, ಬೆಂಗಳೂರು

ವಿಷಯ: ಮಹಾತ್ಮಗಾಂಧಿ : ವ್ಯಕ್ತಿ ಮತ್ತು ವಿಚಾರ



### ೨೬-೧೧-೨೦೧೮ ಸೋಮವಾರ ಸಂಜೆ ೬-೦೦ ಗಂಟೆಗೆ

ತೀ.ನಂ.ಶ್ರೀ ಸ್ಮಾರಕದತ್ತಿ ಉಪನ್ಯಾಸ

ಉಪನ್ಯಾಸ : ಪ್ರೊ॥ ರಾಮರಾವ್ ಕುಲಕರ್ಣಿ

(ಖ್ಯಾತ ವಿಮರ್ಶಕರು)

ವಿಷಯ : ತೀನಂಶ್ರೀ ಅವರ ವಿಮರ್ಶೆ ವಿಧಾನ (ಸಹೃದಯತೆ ಮತ್ತು ಪ್ರಬುದ್ಧತೆ)

# ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳು

### ಸಾಹಿತ್ಯ ವಿಹಾರ–೬ ಸಾಕ್ಷ್ಯ ಚಿತ್ರ ಪದರ್ಶನ

ದಿನಾಂಕ ೦೪–೧೦–೨೦೧೮ ಗುರುವಾರ ಸಂಜೆ ೬.೦೦ ಗಂಟೆಗೆ ಸದಸ್ಯರುಗಳಿಗೆ ಡಾ.ಯು.ಆರ್. ಅನಂತಮೂರ್ತಿ ಮತ್ತು ಶ್ರೀಮತಿ ನೀಲಾ ಪದ್ಮನಾಭನ್ ವ್ಯಕ್ತಿಚಿತ್ರದ ಸಾಕ್ಷ್ಯಚಿತ್ರ ಪ್ರದರ್ಶನ ನೀಡಲಾಯಿತು.

### ಅಕ್ಕರ ಗೊಟ್ಟಿ –೪೨. ದಿನಾಂಕ ೨೦.೧೦.೨೦೧೮.

ಚಾಲನೆ ನೀಡಿದವರು: ಶ್ರೀಮತಿ. ಸಿವಿ. ಶೈಲಜ, ಉಪನ್ಯಾಸಕರು, ಈಸ್ಟ್ ಪಾಯಿಂಟ್ ಕಾಲೇಜು, ಬೆಂಗಳೂರು.

ವಿಷಯ: "ಕನ್ನಡ ಸಂವರ್ಧನೆ : ಆಧುನಿಕ ಆಶೋತ್ತರಗಳು."

ಅಕ್ಕರಗೊಟ್ಟಿಯ ೪೨ನೇ ಕಾರ್ಯಕ್ರಮಕ್ಕೆ ಚಾಲನೆ ನೀಡಲು



ಆಗಮಿಸಿದ ಶ್ರೀಮತಿ. ಶೈಲಜ ಅವರಿಗೂ ಮತ್ತು ಭಾಗವಹಿಸಲು ಬಂದ ವಿದ್ವಾಂಸರೆಲ್ಲರಿಗೂ ಶ್ರೀ ಗುರುಪ್ರಸಾದ್ ಅವರು ಸ್ವಾಗತ ಕೋರಿದರು. ನಂತರ ಅಕ್ಕರ ಗೊಟ್ಟಿಯ ರೂಪು, ರೇಷೆಗಳನ್ನು ಸಭೆಗೆ ತಿಳಿಸಿ, ಶೈಲಜ ಅವರ ಪರಿಚಯವನ್ನು ಸಭೆಗೆ ಮಾಡಿ, ವೇದಿಕೆಯನ್ನು ಶೈಲಜ ಅವರಿಗೆ ಬಿಟ್ಟುಕೊಡಲಾಯಿತು.

ಶೈಲಜ ತಾವು ಪ್ರಸ್ತುತ ಕುಪ್ಪಂನ ದ್ರವಿಡಿಯನ್ ಯೂನಿವರ್ಸಿಟಿಯಲ್ಲಿ ಪಿಎಚ್. ಡಿ ಪದವಿಗಾಗಿ ಮೇಲಿನ ವಿಷಯವನ್ನೇ ನೊಂದಾಯಿಸಿರುವುದಾಗಿ ತಿಳಿಸಿ, ಈ ದಿನದ ಚರ್ಚೆಯಲ್ಲಿ ಲಭ್ಯವಾಗುವ ಉಪಯುಕ್ತ ಸಲಹೆ, ಸೂಚನೆ, ಮತ್ತು ಮಾಹಿತಿಗಳು ತಮಗೆ ಅಮೂಲ್ಯವಾದುದೆಂದು ಮತ್ತು ಅವುಗಳನ್ನ ಸೂಕ್ತವಾಗಿ ಬಳಸಿಕೊಳ್ಳಲು ಉತ್ಸುಕಳಾಗಿದ್ದೇನೆಂದು ತಿಳಿಸಿ, ಚರ್ಚೆಗೆ ಚಾಲನೆ ನೀಡಿದರು.

ವಿಷಯವು ಬಹಳ ದೀರ್ಘವಾದ ಚರ್ಚೆಗೆ ಕಾರಣವಾಯಿತು. ಬಹುತೇಕ ವಿದ್ವಾಂಸರು, ಪಿಎಚ್.ಡಿ ಪದವಿಗಾಗಿ ಆರಿಸಿಕೊಂಡ ವಿಷಯವು, ಬಹಳ ವಿಷದವಾಗಿಯೂ, ವಿಸ್ತಾರವಾಗಿಯೂ, ಬಹುಮುಖಿ ಆಯಾಮಗಳನ್ನೊಳಗೊಂಡಿರುವುದಾಗಿ ತಿಳಿಸಿ, ವಿಷಯವನ್ನು ನಿರ್ದಿಷ್ಟ ಕಾಲಾವಧಿಯ ಚೌಕಟ್ಟಿನಲ್ಲಿ ಸೀಮಿತಗೊಳಿಸುವುದು ಉಚಿತವೆಂದು ಉದಾಹರಣೆಗಳೊಂದಿಗೆ ಸೂಚಿಸಿದರು. ಎಲ್ಲರ ಸಲಹೆ, ಸೂಚನೆಗಳನ್ನು ಶೈಲಜ ಅವರು ಸ್ವೀಕರಿಸಿದರು.

ಪ್ರೊ. ಎನ್.ಎಸ್. ಅಶ್ವತ್ಥನಾರಾಯಣ ಶಾಸ್ತ್ರೀ (ನೈಷಧಂ ಎಸ್ಸೆ), ಪ್ರೊ. ಜಿ. ಅಶ್ವತ್ಥನಾರಾಯಣ (ಅನಾಜಿ), ಡಾ. ಆರ್.ಲಕ್ಷ್ಮೀ ನಾರಾಯಣ, ಡಾ.ವಿಜಯ ಸುಬ್ಬರಾಜ್, ಮತ್ತಿತರರು ಭಾಗವಹಿಸಿ, ಉಪಯುಕ್ತ ಮಾಹಿತಿ ನೀಡಿ ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದರು.

ಡಾ, ವಿಜಯ ಸುಬ್ಬರಾಜ್, ಕಾರ್ಯದರ್ಶಿಗಳ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

### ಕಿರು ಪರಿಚಯ

### ಎಮ್.ಆರ್. ನಾಗರಾಜು



ಪ್ರೊ. ಮೂಡಿಗೆರೆ ರಾಮಯ್ಯ ನಾಗರಾಜುರವರು (ಪ್ರೊ. ಎಮ್.ಆರ್.ಎನ್.) ಬೆಂಗಳೂರಿನ ಸರ್ಕಾರಿ ವಿಜ್ಞಾನ ಕಾಲೇಜಿನಲ್ಲಿ ರಸಾಯನ ಶಾಸ್ತ್ರದ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ 2008ರ ಮೇ ತಿಂಗಳಿನಲ್ಲಿ ನಿವೃತ್ತರಾದರು. ಕಳೆದ ಮೂರೂವರೆ ದಶಕಗಳಿಂದ ಶಿಕ್ಷಣ ಕ್ಷೇತ್ರಕ್ಕೆ ಅಪಾರ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ. ಇವರು ರಸಾಯನ ಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದಾರೆ.

ವಿಜ್ಞಾನ ಪ್ರಚಾರ ಅವರಿಗೆ ಪ್ರಿಯವಾದ ಕೆಲಸವಾದ್ದರಿಂದ, ತಮಗೆ ಲಭಿಸಿದ ಪದೋನ್ನತಿಯ ಅವಕಾಶಗಳನ್ನು ಸ್ವೀಕರಿಸದೆ, ಕರ್ನಾಟಕದ ಉದ್ದಗಲಕ್ಕೂ ಸಂಚರಿಸಿ, ಮಕ್ಕಳಿಗೆ ಮತ್ತು ಶಿಕ್ಷಕರಿಗೆ ವಿವಿಧ ಬಗೆಯ ತರಬೇತಿ ಕಾರ್ಯಕ್ರಮ, ಶಿಬಿರ, ಕಮ್ಮಟಗಳನ್ನು ನಡೆಸಿಕೊಡುತ್ತಿದ್ದಾರೆ.

ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಸ್ಥಾಪನಾ ದಿನಗಳಿಂದಲೂ ವಿವಿಧ ಹುದ್ದೆಗಳಲ್ಲಿ ಸೇವೆ ಸಲ್ಲಿಸುತ್ತಾ ಬಂದಿರುತ್ತಾರೆ. ಕರ್ನಾಟಕ ಸರ್ಕಾರದ ಪ್ರತಿನಿಧಿಯಾಗಿ ವಿಜ್ಞಾನ ಪರಿಷತ್ತಿನ ಕಾರ್ಯಕಾರಿ ಸಮಿತಿ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದಾರೆ. ವಿಜ್ಞಾನ ಪರಿಷತ್ತಿನ 'ಬಾಲ ವಿಜ್ಞಾನ' ಕನ್ನಡ ಮಾಸ ಪತ್ರಿಕೆಯ ಸಂಪಾದಕ ಮಂಡಲಿಯಲ್ಲಿ 25 ವರ್ಷಗಳ ಕಾಲ ದುಡಿದು, ಪ್ರಧಾನ ಸಂಪಾದಕರಾಗಿ ಹಲವಾರು ವರ್ಷ ಮಾರ್ಗದರ್ಶನ ಮಾಡಿದ್ದಾರೆ.

'ತಿಳಿ ಮನ', 'ಅಂತರೀಕ್ಷಣೆ', 'ವಿಜ್ಞಾನ ಲಹರಿ', 'ರಾಸಯನಿಕ ಕ್ರಿಯೆಯ ಬಗೆ ಬಗೆಯೆ?', 'ತಾಪ–ಪ್ರತಾಪ', ನೆನಪಿನ ಶಕ್ತಿ, ಧ್ಯಾನ ಮತ್ತು ಏಕಾಗ್ರತೆ ಮತ್ತಿತರ ಹಲವಾರು ಪುಸ್ತಕಗಳನ್ನು ಇವರು ಬರೆದು ಪ್ರಕಟಿಸಿದ್ದಾರೆ. ಇವರು ಬರೆದ ನೂರಾರು ಲೇಖನಗಳು ನಮ್ಮ ರಾಜ್ಯದ ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಕನ್ನಡದಲ್ಲಿ ವಿಜ್ಞಾನದ ಹೊಸ ಬರಹಗಾರರಿಗೆ ಮಾರ್ಗದರ್ಶನ ಮಾಡಲು ಅನೇಕ 'ವಿಜ್ಞಾನ ಬರಹಗಾರರ ಕಮ್ಮಟ'ಗಳನ್ನು ನಡೆಸಿಕೊಟ್ಟಿರುತ್ತಾರೆ. ಕರ್ನಾಟಕದ ಉದ್ದಗಲಕ್ಕೂ ನೂರಾರು ವಿಜ್ಞಾನ ಸಂಘ–ಸಂಸ್ಥೆಗಳೊಡನೆ ನಿಕಟ ಒಡನಾಟದಲ್ಲಿದ್ದು, ಅವುಗಳಿಗೆ ಮಾರ್ಗದರ್ಶಕರಾಗಿ, ಆಪತ್ಬಾಂಧವರಾಗಿ, ಉತ್ತಮ ಸಂಘಟಿಕರಾಗಿದ್ದಾರಲ್ಲದೆ, ರಾಜ್ಯವ್ಯಾಪಿ ನೂರಾರು ನಿಷ್ಠ ಕಾರ್ಯಕರ್ತರನ್ನು ತರಬೇತುಗೊಳಿಸಿ ನಮ್ಮ ರಾಜ್ಯದ ವಿಜ್ಞಾನ ಚಳವಳಿಯನ್ನು ಕಟ್ಟಲು ಉತ್ಕಟ ಕೊಡುಗೆ ನೀಡಿದ್ದಾರೆ.

## ಕಿರು ಪರಿಚಯ
## ಶ್ರೀಧರ ಬನವಾಸಿ ಜಿ ಸಿ



'ಫಕೀರ' ಎಂಬ ಅಂಕಿತದಲ್ಲಿ ಸಾಹಿತ್ಯ ರಚನೆಯಲ್ಲಿ ತೊಡಗಿರುವ ಶ್ರೀಧರ ಬನವಾಸಿ, ಮೂಲತಃ ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲೂಕಿನ ಬನವಾಸಿಯವರು. ಫೆಬ್ರುವರಿ 6, 1985ರಲ್ಲಿ ಜನನ. ಬನವಾಸಿ, ಉಜಿರೆ ಹಾಗೂ ದಾವಣಗೆರೆಯಲ್ಲಿ ಶಿಕ್ಷಣಾಭ್ಯಾಸ. ಮೆಕ್ಯಾನಿಕಲ್ ಎಂಜನಿಯರಿಂಗ್, ಜರ್ನಲಿಸಂ ಮತ್ತು ಮಾಸ್ ಕಮ್ಯುನಿಕೇಷನ್‌ನಲ್ಲಿ ಅಧ್ಯಯನ ಮಾಡಿದ್ದಾರೆ. ಹಲವು ವರ್ಷಗಳ ಕಾಲ ಮಾಧ್ಯಮ ಮತ್ತು ಮನರಂಜನಾ ಕ್ಷೇತ್ರದಲ್ಲಿ ಉದ್ಯೋಗ. ಅನೇಕ ಟೀವಿ ಕಾರ್ಯಕ್ರಮಗಳು, ಜಾಹೀರಾತು ಮತ್ತು ಸಾಕ್ಷ್ಯಚಿತ್ರಗಳನ್ನು ನಿರ್ದೇಶನ ಮಾಡಿದ್ದಾರೆ. ಸದ್ಯ 'ವೆಸ್ತಾಕ್ರಾಫ್ಟ್' ಎಂಬ ಸಂಸ್ಥೆಯ ನಿರ್ದೇಶಕರಾಗಿ ಕೆಲಸ ಮಾಡುತ್ತಿದ್ದಾರೆ.

ಕಾಲೇಜು ದೆಸೆಯಿಂದಲೂ ಕತೆ, ಕಾವ್ಯ, ಅಂಕಣ ಬರಹಗಳಲ್ಲಿ ಗೀಳು ಹಚ್ಚಿಕೊಂಡು ಸಾಹಿತ್ಯದ ಒಲವನ್ನು ಬೆಳೆಸಿಕೊಂಡವರು.ಇವರ ಕೆಲವು ಕಥೆಗಳು ರಾಜ್ಯಮಟ್ಟದ ಕಥಾಸ್ಪರ್ಧೆಯಲ್ಲಿ ಬಹುಮಾನಿತವಾಗಿವೆ, ಹಲವು ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ನಾಟಕ ಮತ್ತು ದೃಶ್ಯ ಮಾಧ್ಯಮಕ್ಕೂ ಕೆಲವು ಕಥೆಗಳನ್ನು ಅಳವಡಿಸಲಾಗಿದೆ.

'ಅಮ್ಮನ ಆಟೋಗ್ರಾಫ್', 'ದೇವರ ಜೋಳಿಗೆ','ಬ್ರಿಟಿಷ್ ಬಂಗ್ಲೆ' ಪುಸ್ತಕಗಳ ಮೂಲಕ ಕನ್ನಡ ಕಥಾ ಕ್ಷೇತ್ರದಲ್ಲಿ ಮಹತ್ವದ ಕಥೆಗಾರರಾಗಿ ಶ್ರೀಧರ ಬನವಾಸಿ ಗುರುತಿಸಿಕೊಂಡಿದ್ದಾರೆ.ಇವರ ಕಥೆಗಳ ಮೇಲೆ ಎಂ.ಫಿಲ್ ಅಧ್ಯಯನವನ್ನು (ಹಂಪಿ ಕನ್ನಡ ವಿಶ್ವವಿದ್ಯಾಲಯ) ಕೂಡ ಮಾಡಲಾಗಿದೆ.

ಕಥೆಗಾರನಾಗಿ, ಆಲ್ ಇಂಡಿಯಾ ರೇಡಿಯೋ, 2016ರಲ್ಲಿ ಕೇಂದ್ರ ಸಾಹಿತ್ಯ ಅಕಾದೆಮಿಯ 'ಕಥಾಸಂಧಿ' ಕಾರ್ಯಕ್ರಮ, ಮತ್ತು 2018ರಲ್ಲಿ ನವ ದೆಹಲಿಯಲ್ಲಿ ಕೇಂದ್ರ ಸಾಹಿತ್ಯ ಅಕಾದೆಮಿಯ 75 ವರ್ಷಗಳ ಸಂಭ್ರಮದಲ್ಲಿ ನಡೆದ'ಯುವಸಾಹಿತಿ: ದಿ ನ್ಯೂ ಹಾರ್ವೆಸ್ಟ್' ಕಾರ್ಯಕ್ರಮದಲ್ಲಿ ಕಥಾವಾಚನ ಮತ್ತು ಸಂವಾದದಲ್ಲಿ ಇವರು ಭಾಗಿಯಾಗಿದ್ದು ವಿಶೇಷ. "ಕನ್ನಡ ಕಥಾ ಜಗತ್ತಿನಲ್ಲಿ ಶ್ರೀಧರ ಬನವಾಸಿಯ ಕಥೆಗಳು ವಿಭಿನ್ನ ದೃಷ್ಟಿಕೋನದಲ್ಲಿ ನಿಂತು ತಮ್ಮದೇ ವಿಶಿಷ್ಟ ನಿರೂಪಣೆಯ ಮೂಲಕ ಓದುಗರ ಮನಸೆಳೆಯುತ್ತವೆ" ಅನ್ನುವ ಅಂಶವನ್ನು ವಿಮರ್ಶಕರು ಗುರುತಿಸಿದ್ದಾರೆ. ವಿಶಿಷ್ಟ ಪಾತ್ರಗಳ ಹುಡುಕಾಟ ಮತ್ತು ಕಥಾ ವಸ್ತುವಿನಲ್ಲಿ ಕಲ್ಪನೆಗಿಂತ ವಾಸ್ತವ ಜಗತ್ತಿನ ಅಂತಃಸತ್ವವನ್ನು ಅನ್ವೇಷಿಸುವ ಪ್ರಯತ್ನವನ್ನು ಅವರ ಕಥೆ ಮತ್ತು ಕವನಗಳಲ್ಲಿ ಕಾಣಬಹುದು.

ಇವರಿಗೆ ಅರಳು ಸಾಹಿತ್ಯ, ವಸುಧೇವ ಭೂಪಾಲಂ, ಗುಬ್ಬಿ, ಸೋಲೂರು ಮುರುಗಾರಾಧ್ಯ ಪ್ರಶಸ್ತಿ, ಕುವೆಂಪು ಪ್ರಶಸ್ತಿ ಸೇರಿದಂತೆ ಹಲವು ಸಾಹಿತ್ಯ ಪ್ರಶಸ್ತಿಗಳು ಅರಸಿ ಬಂದಿವೆ.

## ಶ್ರೀಮತಿ ಸಿ.ವಿ. ಶೈಲಜಾ – ಕಿರುಪರಿಚಯ

ಶ್ರೀಮತಿ. ಶೈಲಜಾ, ಬೆಂಗಳೂರು ವಿಶ್ವವಿದ್ಯಾಲಯದಿಂದ 1993ರಲ್ಲಿ ಬಿ.ಎ. ಪದವಿ ಪಡೆದು, ಹದಿಮೂರು ವರ್ಷದ ನಂತರ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯದಿಂದ 2006ರಲ್ಲಿ ಕನ್ನಡ ಎಂ.ಎ. ಪದವಿಯನ್ನು ಪಡೆದರು. 2016ರಲ್ಲಿ 'ಕನ್ನಡ ಪರ ಹೋರಾಟಗಳು: ಸಾಂಸ್ಕೃತಿಕ ಸಂಕಥನ'ವೆಂಬ ವಿಷಯದ ಬಗ್ಗೆ, ಕುಪ್ಪಂನ ದ್ರವಿಡಿಯನ್ ಯೂನಿವರ್ಸಿಟಿಯಲ್ಲಿ ಪಿಎಚ್.ಡಿ. ಪದವಿಗಾಗಿ ತಮ್ಮ ಹೆಸರನ್ನು ನೊಂದಾಯಿಸಿಕೊಂಡಿದ್ದಾರೆ. ಹನ್ನೆರಡು ವರ್ಷಗಳಿಂದಲೂ ಕನ್ನಡ ಉಪನ್ಯಾಸಕರಾಗಿ ಸೇವೆಸಲ್ಲಿಸಿ, ಪ್ರಸ್ತುತ 2014ರಿಂದ ಈಸ್ಟ್–ಪಾಯಿಂಟ್ ಕಾಲೇಜಿನಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಕನ್ನಡ ನಾಡು, ನುಡಿ, ಸಂಸ್ಕೃತಿ, ಮತ್ತು ಜಾನಪದ ವಿಷಯಗಳ ಬಗ್ಗೆ ಅಪಾರ ಒಲವು ಮತ್ತು ಕಾಳಜಿ ಹೊಂದಿರುವ ಶೈಲಜಾರವರು, ಕಾಲೇಜಿನ ಕನ್ನಡ ಸಂಘದ ಸಂಚಾಲಕರು. ಸಾಹಿತ್ಯ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಆಯೋಜಿಸುವಲ್ಲಿ ಉತ್ಸಾಹ, ಕನ್ನಡಪರ ಸಂಘಟನೆಗಳಲ್ಲಿ ಮತ್ತು ಶಿಬಿರ, ಕಮ್ಮಟ, ವಿಚಾರ ಸಂಕಿರಣಗಳಲ್ಲಿ ಭಾಗವಹಿಸುತ್ತಾ ಕನ್ನಡದ ಏಳ್ಗೆಗಾಗಿ ಸದಾ ಶ್ರಮಿಸುವ ಮನೋಭಾವ ಬೆಳಸಿಕೊಂಡಿದ್ದಾರೆ. ಹಲವಾರು ಕಮ್ಮಟಗಳಲ್ಲೂ, ವಿಚಾರಗೋಷ್ಠಿಗಳಲ್ಲೂ ಇವರು ಕನ್ನಡ ಸಂಶೋಧನೆ, ಕನ್ನಡದ ಮೇಲೆ ಜಾಗತೀಕರಣದ ಪ್ರಭಾವ, ಕರ್ನಾಟಕದಲ್ಲಿ ಕನ್ನಡ ಭಾಷೆಯ ಉಳಿವಿನ ಸವಾಲುಗಳು ಹೀಗೆ ಹಲವಾರು ಕನ್ನಡ ಭಾಷೆಯ ಏಳಿಗೆಗಾಗಿ ಪ್ರಬಂಧಗಳನ್ನು ಮಂಡಿಸಿದ್ದಾರೆ.

## ನೈಷಧಂ ಎಸ್ಸೆ

ಇವರ ನಿಜ ನಾಮ ನೈಷಧಂ ಸುಬ್ಬಯ್ಯ ಅಶ್ವತ್ಥನಾರಾಯಣ ಶಾಸ್ತ್ರೀ.

ಇಂಗ್ಲೀಷ್ ಭಾಷೆಯಲ್ಲಿ ಸ್ನಾತಕೋತ್ತರ ಪದವೀಧರರಾದ ನೈಷಧಂ ಎಸ್ಸೆ, ಸರ್ ಎಂ.ವಿ. ಕಾಲೇಜು ಮತ್ತು ಎ.ಪಿ.ಎಸ್. ಕಾಲೇಜುಗಳಲ್ಲಿ ತಮ್ಮ ಅಧ್ಯಾಪನಾ ವೃತ್ತಿಯನ್ನು ನಿರ್ವಹಿಸಿ ಈಗ ವಿಶ್ರಾಂತರಾಗಿದ್ದಾರೆ. ಕಥೆ, ಕಾದಂಬರಿ, ಕಾವ್ಯ, ಥೀಯೇಟರ್, ಜಾನಪದ, ವಿಜ್ಞಾನ ಹಾಗೂ ತತ್ತ್ವಜ್ಞಾನ– ಹಾಗೂ ಬದುಕಿನ ಸುತ್ತಲಿನ ವಿಷಯದಲ್ಲಿ ನಿರಂತರ ಕುತೂಹಲಿಗಳು. ಇವರ ಕೆಲವು ಕೃತಿಗಳು: ಸುಪ್ತಚೇತನ ಕ್ರಾಂತಿ (ಕಾವ್ಯ), ಎಳರಂಗ (ಕಿರು ನಾಟಕ), ಚಿನ್ನದುಳಿ ಮತ್ತು ಕಲ್ಲುಟಗರು (ಚೀನೀ ಜಾನಪದ ಕಥೆಗಳು), ಕಪ್ಪು ವಜ್ರಗಳು ಮತ್ತು ಚೆಂಗುಲಾಬಿ (ಕಪ್ಪುಕಾವ್ಯ), ಸಿದ್ಧಾರ್ಥ (ಕಾದಂಬರಿ), ಸೂಡರ ನುಂಗುವ ಕತ್ತಲು (ನಾಟಕ), In the land of the Buddha (ಪ್ರವಾಸ ಕಥನ), Towards Bolenath (ಪ್ರವಾಸ ಕಥನ), Kuchela Krishna (ಅನು: ಪು.ತಿ.ನ. ಗೀತನಾಟಕ), ಇವಲ್ಲದೆ, ಇಂಗ್ಲೀಷ್ ಭಾಷಾಬೋಧನೆ (AIR), ನಾಟಕಗಳು, ಭಾಷಣಗಳು, ಚಿಂತನಗಳು ಮುಂತಾಗಿ ಮಾದ್ಯಮಗಳಿಗಾಗಿ ಬರವಣಿಗೆಗಳಾಗಿವೆ. ಲೇ ಖನಗಳು, ಕವಿತೆಗಳು ಆಗಿಂದಾಗ್ಗೆ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಕಾಲೇಜು, ಪತ್ರಿಕೆಗಳು– ಸಂಘಸಂಸ್ಥೆಗಳಿಗಾಗಿ ಸ್ಮರಣ ಸಂಚಿಕೆಗಳ ಸಂಪಾದನೆಯ ಕಾರ್ಯಗಳ ನಿರ್ವಹಣೆಯಲ್ಲಿಯೂ ತೊಡಗಿದ್ದಾರೆ.



## ಶಾ ಬಾಲೂರಾವ್



ಶ್ರೀಮತಿ ಕಮಲಿನಿ ಬಾಲೂರಾವ್‌ಅವರು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ಸ್ಥಾಪಿಸಿರುವ ಎರಡು ಪ್ರಶಸ್ತಿಗಳು 'ಶಾ ಬಾಲೂರಾವ್‌ಯುವ ಬರಹಗಾರ ಪ್ರಶಸ್ತಿ' ಮತ್ತು 'ಶಾ ಬಾಲೂರಾವ್ ಅನುವಾದ ಪ್ರಶಸ್ತಿ'. ದಿವಂಗತ ಶ್ರೀ ಶಾ. ಬಾಲೂರಾವ್‌ಅವರು ಪ್ರಖ್ಯಾತ ಸಾಹಿತಿಗಳಾಗಿದ್ದವರು. ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳೆರಡರಲ್ಲಿಯೂ ಮೌಲಿಕವಾದ ಬರವಣಿಗೆಯನ್ನು ಮಾಡಿದವರು. ಸ್ವತಂತ್ರವಾಗಿ ಕಥೆಗಳನ್ನೂ ಬರೆದದ್ದಲ್ಲದೆ ಅನುವಾದವನ್ನೂ ಮಾಡಿದವರು. ಬಂಗಾಳಿ ಮತ್ತು ರಷ್ಯನ್ ಭಾಷೆಗಳಿಂದ ನೇರವಾಗಿ ಕಥೆಗಳನ್ನು, ಕವಿತೆಗಳನ್ನು ಅನುವಾದ ಮಾಡಿರುವುದು ಶಾ. ಬಾಲೂರಾವ್ ಅವರ ಹೆಗ್ಗಳಿಕೆ. ಈ ಎರಡೂ ಪ್ರಶಸ್ತಿಗಳು ಅವರಿಗೆ ಪ್ರಿಯವಾಗಿದ್ದ ಸಾಹಿತ್ಯ ಕೃಷಿಗೆ ಅವರ ನೆನಪಿನಲ್ಲಿ ಶ್ರೀಮತಿ ಕಮಲಿನಿಯವರು ಸ್ಥಾಪಿಸಿರುವಂತಹವು.




**ಪುರಾಣ:** ಇದೊಂದು ಸಂಸ್ಕೃತ ಪದ, ಕನ್ನಡದಲ್ಲಿಯೂ ವ್ಯಾಪಕವಾಗಿಯೂ ವಿವಿಧಾರ್ಥಗಳಲ್ಲಿಯೂ ಬಳಕೆಯಲ್ಲಿದೆ.ಪುರಾಣ ಎಂದರೆ ಹಳೆಯದು, ಪುರಾತನವಾದದ್ದು ಎಂಬುದು ಮೂಲಾರ್ಥ."ಪುರಾಣಮಿತ್ಯೇವ ನ ಸಾಧು ಸರ್ವಂ। ನಚಾಪಿ ಸರ್ವಂ ನವಮಿತ್ಯವದ್ಯಂ" ಎಂಬ ಕಾಳಿದಾಸನ ಮಾತು ಪ್ರಸಿದ್ಧ. ಹಳೆಯದೆಲ್ಲ ಶ್ರೇಷ್ಠವಲ್ಲ, ಹೊಸತೆಲ್ಲ ಕನಿಷ್ಠವಲ್ಲ ಎಂಬುದು ಇದರ ಸ್ಥೂಲಾರ್ಥ. ದೇವರನ್ನು ಪುರಾಣಪುರುಷ ಎಂದು ಕರೆಯುತ್ತಾರೆ (ಈ ಶಬ್ದಕ್ಕೆ ಮುದುಕ ಎಂಬರ್ಥವೂ ಇದೆ). ಕೆಲವು ಹಳಗನ್ನಡ ಕಾವ್ಯಗಳಲ್ಲಿಯೂ ಈ ಪದ ಈ ಅರ್ಥದಲ್ಲಿಯೇ ಬಳಕೆಯಾಗಿದೆ: ಪುರಾಣಕವಿ ಎಂಬ ಮಾತು 'ಕವಿರಾಜಮಾರ್ಗ'ದಲ್ಲಿ ಹಾಗೂ 'ಪಂಪಭಾರತ'ಗಳಲ್ಲಿದ್ದರೆ, ಪುರಾಣಕೂಪ (ಹಳೆಯ ಬಾವಿ) ಎಂಬುದು ದುರ್ಗಸಿಂಹನ 'ಪಂಚತಂತ್ರ'ದಲ್ಲಿ ಬಂದಿದೆ. ವಿಷ್ಣುವು ತಳೆದನೆನ್ನಲಾದ ಕೂರ್ಮಾವತಾರವನ್ನು 'ಲೀಲಾವತಿ' ಎಂಬ ಕಾವ್ಯದಲ್ಲಿ 'ಪುರಾಣಕಮಠ' ಎಂದು ಕರೆಯಲಾಗಿದೆ.

ಆನಂತರ ಹಿಂದೆ ನಡೆದ ಕತೆ, ದೇವತೆಗಳ ಸಂಕಥನ ಎಂಬರ್ಥದಲ್ಲಿ ಪುರಾಣ ಎಂಬ ಶಬ್ದ ಬಳಕೆಯಾಯಿತು. ವ್ಯಾಸನು ಹದಿನೆಂಟು ಪುರಾಣಗಳನ್ನೂ, ಹದಿನೆಂಟು ಉಪಪುರಾಣಗಳನ್ನೂ ಬರೆದನೆಂಬ ಪ್ರತೀತಿಯಿದೆ. ವೈದಿಕ ಪುರಾಣದ ಲಕ್ಷಣಗಳನ್ನು ಹೀಗೆ ಹೇಳುತ್ತಾರೆ: "ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ। ವಂಶಾನುಚರಿತಂ ಚೇತಿ ಲಕ್ಷಣಾನಾಂತು ಪಂಚಕಂ" (ಸೃಷ್ಟಿ, ವಿಕಾಸ, ಋಷಿವಂಶವರ್ಣನೆ, ಮನುಗಳ ಕಾಲಾವಧಿ, ರಾಜವಂಶಾವಳಿಯ ಕಥನ). ಇಂಗ್ಲಿಷ್‌ನಲ್ಲಿ ಇದನ್ನು ಮೈಥಾಲಜಿ ಎನ್ನುತ್ತಾರೆ (ಗ್ರೀಕ್ ಭಾಷೆಯಲ್ಲಿ ಮೈಥಾಸ್ ಎಂದರೆ ಕಟ್ಟು ಕತೆ ಎಂದರ್ಥ). ವಿವಿಧ ಧರ್ಮಗಳಿಗೆ ಸಂಬಂಧಿಸಿದಂತೆ ಪುರಾಣಗಳ ಲಕ್ಷಣಗಳು ಬದಲಾಗುತ್ತವೆ: ಜೈನ ಪುರಾಣ, ವೀರಶೈವ ಪುರಾಣ ಹೀಗೆ. ಆಯಾ ಮತಧರ್ಮದ ಪುರಾಣಗಳಲ್ಲಿ ಅವಕ್ಕೆ ಸಂಬಂಧಿಸಿದ ಆಚರಣೆಗಳು, ಚಾರಿತ್ರಿಕ ಪುರುಷರ ದೈವೀಕರಣ, ಸಾಮೂಹಿಕ ಸ್ವಭಾವ, ನೀತಿಬೋಧೆಗಳಿರುತ್ತವೆ ಎಂದು ವಿದ್ವಾಂಸರು ವಿಶ್ಲೇಷಿಸುತ್ತಾರೆ.

ಪುರಾಣ ಹೇಳುವವನು ಪೌರಾಣಿಕ, ಪುರಾಣವನ್ನು ಕೇಳುವುದು ಪುರಾಣಶ್ರವಣ, ಹಿಂದಿನಕಾಲದಿಂದ ನಡೆದ ಬಂದ ರೀತಿಯೇ ಪುರಾಣ ಮಾರ್ಗ. ಪುರಾಣ ಕತೆಗಳಿಗೆ ಆಧಾರವಿಲ್ಲದ್ದರಿಂದ ಅದಕ್ಕೆ ಸುಳ್ಳು ಎಂಬರ್ಥವೂ, ಕಾಲಹರಣದ ಹರಟೆ ಎಂಬರ್ಥವೂ ಬಂದಿದೆ. ಅಪ್ಪಟ ಸುಳ್ಳಿನ ಕತೆಯನ್ನು 'ಬುರುಡೆ ಪುರಾಣ' ಎಂದೇ ಗೇಲಿಮಾಡುತ್ತಾರೆ.

=====

**ಪಂಚಪ್ರಾಣ:** ಶರೀರದಲ್ಲಿನ ಐದು ಬಗೆಯ ವಾಯುಗಳಿಗೆ ಒಟ್ಟಾರೆ ಈ ಹೆಸರಿದೆ; ಅವನ್ನು ಪ್ರಾಣವಾಯುಗಳೆಂದು ಕರೆಯುವ ವಾಡಿಕೆಯೂ ಇದೆ. ಅವುಗಳನ್ನು 'ಅಮರಕೋಶ'ವು "ಪ್ರಾಣೋಪಾನಸ್ಸಮಾನಶ್ಚೋದಾನವ್ಯಾನೌ ಚ ವಾಯವಃ" ಎಂದು ಹೆಸರಿಸುತ್ತದೆ (ಪ್ರಾಣ ಉಪಾನ ಸಮಾನ ಉದಾನ ಮತ್ತು ವ್ಯಾನ).ಇವು ಕ್ರಮವಾಗಿ ದೇಹದಲ್ಲಿ ಹೃದಯ, ಗುದಪ್ರದೇಶ, ನಾಭಿ, ಕಂಠ ಹಾಗೂ ಶರೀರದ ಎಲ್ಲ ಭಾಗಗಳಲ್ಲೂ ಇರುವುದೆಂದು ಹೇಳುತ್ತಾರೆ. ಪ್ರಾಣವಾಯುವು ಉಚ್ಛ್ವಾಸ–ನಿಶ್ವಾಸ, ಅಪಾನವಾಯುವು ಮಲಮೂತ್ರ ವಿಸರ್ಜನೆ, ಸಮಾನವಾಯುವು ಆಹಾರಪಚನ, ಉದಾನವಾಯುವು ಮಾತನಾಡುವಿಕೆ ಅಥವಾ ಉದ್ಗಾರ, ವ್ಯಾನವಾಯುವು ಕಣ್ಣುರೆಪ್ಪೆ ಮಿಟುಕಿಸುವುದು – ಈ ಕಾರ್ಯಗಳನ್ನು ನೆರವೇರಿಸುವುದೆಂದು ಹೇಳುತ್ತಾರೆ. "ಪ್ರಾಣವಾಯುಗಳವರು ಸುಭಟಶ್ರೇಣಿದೇಹಕೆ" ಎಂಬುದು ಕುಮಾರವ್ಯಾಸನ ಪ್ರಯೋಗ.ಕೃಷ್ಣನು "ಮಮ ಪ್ರಾಣಾಹಿ ಪಾಂಡವಾಃ" ಎಂದು ಮಹಾಭಾರತದಲ್ಲಿ ಹೇಳುತ್ತಾನೆ. 'ಪ್ರಾಣಸಂಯಮ' ಎಂದರೆ ಉಸಿರಾಟದ ಹತೋಟಿ.ದೇಹ ಮತ್ತು ಪ್ರಾಣವಾಯುಗಳ ಸಂಬಂಧವೇ ಜೀವನ; ಪ್ರಾಣವಾಯುವನ್ನು ದೇಹದಲ್ಲಿ ತಡೆದು ನಿಲ್ಲಿಸಿದಷ್ಟು ಕಾಲವೂ ಮನುಷ್ಯ ಬದುಕಿರಬಹುದು ಎಂಬ ಕಾರಣದಿಂದ ಅದನ್ನು ಒಂದು ಕ್ರಮದಲ್ಲಿ ವ್ಯವಸ್ಥೆಗೊಳಿಸುವುದನ್ನೇ ಯೋಗಶಾಸ್ತ್ರದಲ್ಲಿ 'ಪ್ರಾಣಾಯಾಮ' ಎನ್ನುತ್ತಾರೆ. "ವಿಪ್ರೋತ್ತಮರನುಮತದಿಂ ಪ್ರಾಣಾಯಾಮಮಂ ಮಂತ್ರಿಸಿ" ಎಂಬುದು ಹರಿಹರನ 'ಗಿರಿಜಾ ಕಲ್ಯಾಣ'ದಲ್ಲಿ ಬರುವ ಮಾತು. ಐದು ಉಪವಾಯುಗಳನ್ನೂ ಹೆಸರಿಸುತ್ತಾರೆ. ಅವೆಂದರೆ ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ ಎಂಬವು.

ದ್ವಿಜರು ಊಟಕ್ಕೆ ಕುಳಿತಾಗ ಪ್ರತಿನಿತ್ಯವೂ ಪಂಚ ಪ್ರಾಣಗಳ ಅಧಿದೇವತೆಗೆ ಪೂಜೆಯನ್ನು ಸಮರ್ಪಿಸುತ್ತಾರೆ. ಇದನ್ನು ಬಸವಣ್ಣನು "ಪ್ರಾಣಲಿಂಗ ಪ್ರಸಾದವ ಮುಂದಿಟ್ಟುಕೊಂಡು ಪ್ರಾಣಾಯ ಸ್ವಾಹಾ, ಅಪಾನಾಯ ಸ್ವಾಹಾ, ವ್ಯಾನಾಯ ಸ್ವಾಹಾ, ಉದಾನಾಯ ಸ್ವಾಹಾ, ಸಮಾನಾಯ ಸ್ವಾಹಾ ಎಂಬ ಕರ್ಮಿಗಳನೇನೆಂಬೆ" ಎಂದು ಲೇವಡಿ ಮಾಡುತ್ತಾನೆ. ಬೇಂದ್ರೆಯವರು ತಮ್ಮ 'ನಾನು' ಎಂಬ ಕವನದಲ್ಲಿ ವಿಶ್ವಮಾತೆ, ಭೂಮಾತೆ, ಭರತಮಾತೆ, ಕನ್ನಡತಾಯಿ ಹಾಗೂ ಹಡೆದವ್ವ ಎಂಬ "ಈ ಐದು ಐದೆಯರೆ ಪಂಚ ಪ್ರಾಣಗಳಾಗಿ ಈ ಜೀವದೇವನಿಹನು" ಎಂದು ಹೇಳಿಕೊಳ್ಳುತ್ತಾರೆ. 'ಪಂಚ ಪ್ರಾಣ' ಎಂಬುದು ತುಂಬ ಇಷ್ಟವೆಂದು ಹೇಳಲು ಈಗ ಬಳಸುವ ಸಾಮಾನ್ಯ ನುಡಿಗಟ್ಟಾಗಿದೆ.

## ಎಂವಿಸೀ – ಬದುಕು – ಒಂದು ನೋಟ–೩

––ಡಾ. ಪಿ.ವಿ. ನಾರಾಯಣ

ಪರಿಷತ್ತಿನ ಕೆಲಸ ಹೀಗೇ ಸಾಗಿ ಮುಂದೆ ಅವರ ಕಾರ್ಯಕ್ಷೇತ್ರ ಇಂಗ್ಲಿಷ್–ಕನ್ನಡ ನಿಘಂಟಿನ ಕೆಲಸಕ್ಕೆ ವರ್ಗಾವಣೆಗೊಂಡಿತು; ವೇತನ ಅಷ್ಟೇ, ತಿಂಗಳಿಗೆ ಐವತ್ತು ರೂಪಾಯಿ. ೧೯೩೯ ರಿಂದ ೧೯೪೬ ರವರೆಗೆ ಅವರು ಪ್ರಧಾನ ಸಂಪಾದಕರಾಗಿದ್ದ ಬೆಳ್ಳಾವೆ ವೆಂಕಟನಾರಣಪ್ಪನವರ ಮಾರ್ಗದರ್ಶನದಲ್ಲಿ ಶಿಸ್ತಿನ ಸಿಪಾಯಿಯಾಗಿ ದುಡಿದರು. ನಿಘಂಟು ಸರ್ಕಾರದ ನೆರವು ಪಡೆದ ಯೋಜನೆಯಾದರೂ ಅಲ್ಲಿನ ಕೆಲಸ ಸರ್ಕಾರಿ ಕೆಲಸವಾಗಿರಲಿಲ್ಲ, ಹೀಗಾಗಿ ಆ ಯೋಜನೆ ಮುಕ್ತಾಯಗೊಂಡಾಗ ಮತ್ತೆ ಸೀತಾರಾಮಯ್ಯನವರು ನಿರುದ್ಯೋಗಿಗಳಾಗಬೇಕಾಗಿತ್ತು. ಬೆಳ್ಳಾವೆಯವರ ನಿಧನದ ಕಾರಣದಿಂದ ಎಂ.ಆರ್. ಶ್ರೀನಿವಾಸಮೂರ್ತಿಗಳು ಆ ಹುದ್ದೆಗೆ ಬಂದರು.ಇನ್ನೇನು ನಿಘಂಟುವಿನ ಕೆಲಸ ಮುಗಿಯಬೇಕು ಎನ್ನುವಾಗ, ಅಂದರೆ ೧೯೪೫ ರಲ್ಲಿ ಎಂಆರ್‌ಶ್ರೀ ರಜೆಯ ಮೇಲೆ ಹೋಗಿ ಸೀತಾರಾಮಯ್ಯನವರೇ ಆ ಜಾಗವನ್ನಾಕ್ರಮಿಸಿಕೊಂಡರು. ೧೯೪೬ರ ಹೊತ್ತಿಗೆ ಬೆಂಗಳೂರಿನ ಇಂಟರ್‌ಮೀಡಿಯಟ್ ಕಾಲೇಜಿಲ್ಲಿ ಉಪನ್ಯಾಸಕ ಸ್ಥಾನಕ್ಕೆ ಹೊಸ ಹುದ್ದೆ ನಿರ್ಮಾಣಗೊಂಡದ್ದರಿಂದ ಸೀತಾರಾಮಯ್ಯನವರು ಆ ಹುದ್ದೆಗೆ ನೇಮಕಗೊಳ್ಳುವಂತಾಯಿತು. ಆ ಮುಂದೆ ಇಪ್ಪತ್ತೊಂದು ವರ್ಷಗಳ ಕಾಲ ಅವರು ಅಲ್ಲಿಯೇ ಉಪನ್ಯಾಸಕ ಮತ್ತು ಆ ಬಳಿಕ ರೀಡರ್ ಆಗಿ ನಿವೃತ್ತಿ ಹೊಂದಿದರು. ಕಾಲೇಜು ಇವರ ಕಾಲದಲ್ಲಿ ಪದವಿ ತರಗತಿಗಳನ್ನೂ ಹೊಂದಿತು; ಮತ್ತು ಕಾಲೇಜುಗಳೆಲ್ಲ ಆಗ ಮೈಸೂರು ವಿಶ್ವವಿದ್ಯಾನಿಲಯದ ಆಡಳಿತ ವ್ಯಾಪ್ತಿಯಲ್ಲಿದ್ದವು. ಸೀತಾರಾಮಯ್ಯನವರಿಗೆ ಆಸ್ತಮದಂತಹ ಕಾಯಿಲೆಯ ನಿರಂತರ ನಂಟು. ಇತರ ನೌಕರರು ಬೇರೆ ಬೇರೆ ಊರುಗಳ ಕಾಲೇಜುಗಳಿಗೆ ವರ್ಗಾವಣೆಗೊಳ್ಳುತ್ತಿದ್ದರೂ, ಇವರನ್ನು ಮಾತ್ರ ಬೇರೆ ಯಾವ ಊರಿಗೂ ವರ್ಗ ಮಾಡಲಿಲ್ಲ; ಒಂದು ಅವಧಿಗೆ ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದ ಕುವೆಂಪು ಅವರನ್ನು ಬೇರಾವುದೇ ಕಾಲೇಜಿಗೂ ವರ್ಗಾವಣೆ ಮಾಡದಂತೆ ಆದೇಶಿಸಿದ್ದರಂತೆ. ಆ ಬಳಿಕ ೧೯೬೮ ರಲ್ಲಿ ಅವರನ್ನು ನಿವೃತ್ತ ಶಿಕ್ಷಕರ ಸೇವೆ ಬಳಸಿಕೊಳ್ಳುವ ಯುಜಿಸಿ ಯೋಜನೆಯಡಿ, ಆ ಕೆಲವು ವರ್ಷಗಳ ಹಿಂದಷ್ಟೇ ಸ್ಥಾಪನೆಗೊಂಡಿದ್ದ ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದಲ್ಲಿ ಅವರು ಯುಜಿಸಿ ಪ್ರಾಧ್ಯಾಪಕರಾಗಿ ನೇಮಕಗೊಂಡು ೧೯೭೫ ರವರೆಗೂ ಸೇವೆ ಸಲ್ಲಿಸಿದರು. **(ಮುಂದುವರಿಯುವುದು)**

## ೧೪–೧೧–೨೦೧೮ರಂದು ನಡೆಯಲಿರುವ ಬಿ.ಜಿ. ಕುಸುಮ ಟ್ರಸ್ಟ್‌ದತ್ತಿಯಡಿಯಲ್ಲಿ ಸರ್. ಸಿ.ವಿ.ರಾಮನ್ ಸ್ಮಾರಕ ವಿಜ್ಞಾನ ಉಪನ್ಯಾಸ ಹಿನ್ನಲೆಯಲ್ಲಿ ಕಿರುಪರಿಚಯ

### ಸರ್.ಸಿ.ವಿ.ರಾಮನ್

ಸರ್.ಸಿ.ವಿ.ರಾಮನ್', ನೋಬೆಲ್ ಪ್ರಶಸ್ತಿಗಳಿಸಿದ, ಪ್ರಪ್ರಥಮ ಭಾರತೀಯ ವಿಜ್ಞಾನಿ.

ನವೆಂಬರ್ ೭, ೧೮೮೮ ರಲ್ಲಿ ತಮಿಳುನಾಡಿನ ತಿರುಚಿನಾಪಳ್ಳಿ 'ತಿರುವನೈಕಾವಲ್' ಎಂಬಲ್ಲಿ ಜನಿಸಿದರು. ಅವರತಂದೆ, ಚಂದ್ರಶೇಖರ್ ಕಾಲೇಜಿನಲ್ಲಿ ಭೌತಶಾಸ್ತ್ರ ಪ್ರಾಧ್ಯಾಪಕರಾಗಿದ್ದರು. ಮೇಧಾವಿಯಾಗಿದ್ದರಾಮನ್ ವಿದ್ಯಾಭ್ಯಾಸ ಹಾಗೂ ವೃತ್ತಿಜೀವನದಲ್ಲಿ ಮಾಡಿದ ಸಾಧನೆ ಅಪಾರವಾಗಿತ್ತು.

* ತಮ್ಮ ೧೨ ನೆ ವಯಸ್ಸಿನಲ್ಲೇ 'ಮೆಟ್ರಿಕ್ಯುಲೆಶನ್' ಮುಗಿಸಿದರು.
* 'ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜಿ'ನಲ್ಲಿ ಬಿ.ಎಸ್ಸಿ(೧೯೦೪) ಪದವಿ ಹಾಗೂ ಎಂ.ಎಸ್ಸಿ (೧೯೦೭) ಪದವಿಗಳನ್ನು ಗಳಿಸಿದರು.
* ೧೯೦೭ರಲ್ಲಿ 'ಭಾರತೀಯ ಸಿವಿಲ್ ಸರ್ವಿಸ್ ಪರೀಕ್ಷೆ'ಯಲ್ಲಿ ಉತ್ತೀರ್ಣರಾಗಿ 'ಕಲ್ಕತ್ತೆ'ಯಲ್ಲಿ 'ಡೆಪ್ಯುಟಿ ಅಕೌಂಟೆಂಟ್ ಜನರಲ್' ಆಗಿ ವೃತ್ತಿ–ಜೀವನ ಆರಂಭಿಸಿದರು, ವಿದ್ಯಾರ್ಥಿಯಾಗಿದ್ದಾಗ ವೈಜ್ಞಾನಿಕ ಪ್ರಯೋಗಗಳಲ್ಲಿ ತೋರುತ್ತಿದ್ದ ಆಸಕ್ತಿಯನ್ನು ಅವರು ವೃತ್ತಿನಿರತರಾಗಿದ್ದಾಗಲೂ ಮುಂದುವರಿಸಿದರು.
* ೧೯೧೭ರಲ್ಲಿ 'ಕಲ್ಕತ್ತಾ ವಿಶ್ವವಿದ್ಯಾಲಯದಲ್ಲಿ ಭೌತಶಾಸ್ತ್ರದ ಪ್ರಾಚಾರ್ಯ'ರಾದರು.
* ೧೯೨೪ರಲ್ಲಿ 'ಲಂಡನಿನ ಫೆಲೊ ಆಫ್ ರಾಯಲ್ ಸೊಸೈಟಿ'ಗೆ ರಾಮನ್ ಆಯ್ಕೆಯಾದರು.
* ಮಾರ್ಚ್ ೧೬ ೧೯೨೮ರಲ್ಲಿ ತಮ್ಮ ಶೋಧನೆ, 'ರಾಮನ್‌ಎಫೆಕ್ಟ್'ನ್ನು 'ಬೆಂಗಳೂರಿ'ನಲ್ಲಿ ಬಹಿರಂಗ ಪಡಿಸಿದ ರಾಮನ್, ೧೯೩೦ರಲ್ಲಿ ಅದಕ್ಕಾಗಿ 'ನೋಬೆಲ್ ಪ್ರಶಸ್ತಿ'ಗಳಿಸಿದರು.

ರಾಮನ್ ಪರಿಣಾಮಎಂಬ ತತ್ತ್ವವು ವಿಜ್ಞಾನಕ್ಕೆ ಸರ್ ಸಿ. ವಿ.ರಾಮನ್‌ರ ಒಂದು ದೊಡ್ಡ ಕೊಡುಗೆಯಾಗಿದೆ. "ಆಕಾಶದ ನೀಲಿ ಬಣ್ಣ ಅವರನ್ನು ಸ್ಥಬ್ಧರನ್ನಾಗಿ ಮಾಡಿತ್ತು'. ಅದು ಹೇಗೆ ಸಾಧ್ಯ? ಎಂಬ ಪ್ರಶ್ನೆ ರಾಮನ್‌ರನ್ನು ಮೊದಲಿನಿಂದಲೂ ಕಾಡುತ್ತಿತ್ತು. ಸಮುದ್ರದ ಮೇಲೆ ವಿದೇಶ ಪ್ರಯಾಣದಲ್ಲಿದ್ದಾಗ ಕಡಲಿನ ನೀಲಿ ಬಣ್ಣದ ಕಾರಣವನ್ನು ಅರಿಯಲು ಪ್ರಯೋಗ ಮಾಡುತ್ತ ಹಡಗಿನ ತುಂಬ ಅಲೆದಾಡುತ್ತಿದ್ದರು.

ಆಕಾಶದ ನೀಲಿ ಬಣ್ಣ ರಾಮನ್‌ರ ಕುತೂಹಲ ಕೆರಳಿಸಿ ಪ್ರಯೋಗ–ಕ್ಕೆ ತೊಡಗಿಸಿತು. ಹಾಗೇ ಬಗೆಬಗೆಯ ಹೂಗಳ ಬಣ್ಣದಿಂದಲೂ ಅವರು ಆಶ್ಚರ್ಯಚಕಿತರಾಗುತ್ತಿದ್ದರು. ವಾತಾವರಣದಲ್ಲಿಯ ಧೂಳಿನ ಕಣಗಳು ಬೆಳಕನ್ನು ಭಾಗಶಃ ಚದುರಿಸುವವು. ಹೀಗೆ ಬೆಳಕು ಚದುರಿದಾಗ, ಅದರ ಎಲ್ಲ ಬಣ್ಣಗಳೂ ಚದುರುವುವು. ಹೆಚ್ಚು ಚದುರದ ಕೆಂಪು ಬೆಳಕು ದಿಗಂತದ ಸಮೀಪ ಸೂರ್ಯಕಾಣುವ ಪ್ರದೇಶದಲ್ಲಿ ಪ್ರಜ್ವಲಿಸುವುದು. ಉಳಿದದ್ದು ಆಕಾಶಕ್ಕೆ ನೀಲಿ ಬಣ್ಣವನ್ನು ನೀಡುವುದು. ಬೆಳಕು ಚದುರುವಾಗ ಶಕ್ತಿಯ ಸ್ವೀಕಾರ ಅಥವಾ ದಾನ ಬೆಳಕಿನ ತರಂಗಾಂತರವನ್ನು ನಿರ್ದಿಷ್ಟವಾಗಿ ಬದಲಾಯಿಸುವ ಸಾಧ್ಯತೆ ಲಕ್ಷ್ಯದಲ್ಲೊಂದು ಮಾತ್ರ. ಎಂದರೆ ಒಂದು ಲಕ್ಷ ಬೆಳಕಿನ ಕಣಗಳು ಚದುರಿದಾಗ ಒಂದು ಮಾತ್ರ ರಾಮನ್ ಪರಿಣಾಮಕ್ಕೆ ಒಳಗಾಗುವುದು, ಎನ್ನುವ ವಿಚಾರ ಬೆಳಕಿಗೆ ಬಂತು. ಇದನ್ನೇ "ರಾಮನ್ ಪರಿಣಾಮ" ಎಂದು ಕರೆಯಲಾಗುತ್ತದೆ. ಇದು ಅನ್ವಯಿಕ ಉಪಯುಕ್ತತೆಯುಳ್ಳ ತತ್ವ.

**ಟಾಟ ಇನ್ಸ್ಟಿಟ್ಯೂಟ್‌ನ ನಿರ್ದೇಶಕರಾಗಿ**

೧೯೩೪ರಲ್ಲಿ 'ಬೆಂಗಳೂರಿನ ಇಂಡಿಯನ್ ಇನ್ಸ್ಟಿಟ್ಯುಟ್‌ಆಫ್ ಸೈನ್ಸ್ ನ ನಿರ್ದೇಶಕ,' ರಾಗಿ ಅಧಿಕಾರ ವಹಿಸಿಕೊಂಡ 'ಡಾ.ರಾಮನ್', ತದನಂತರ ೧೯೪೩ರಲ್ಲಿ 'ರಾಮನ್ ಸಂಶೋಧನಾಕೇಂದ್ರ'ವನ್ನು ಬೆಂಗಳೂರಿನಲ್ಲಿ ಸ್ಥಾಪಿಸಿದರು. ಪ್ರೊ.ರಾಮನ್ ಬೆಂಗಳೂರನ್ನು ತಮ್ಮ ಕಾರ್ಯಕ್ಷೇತ್ರವಾಗಿ ಮಾಡಿಕೊಂಡು "ರಾಮನ್ ರೀಸರ್ಚ್ ಇನ್‌ಸ್ಟಿಟ್ಯೂಟ್" ಎಂಬ ವಿಜ್ಞಾನ ಸಂಶೋಧನಾ ಸಂಸ್ಥೆಯನ್ನು ಅವರ ಜೀವಿತಕಾಲದಲ್ಲೇ ಸ್ಥಾಪಿಸಿ ಬಹಳಷ್ಟು ಸಂಶೋಧನೆಗಳನ್ನು ಮಾಡಿದರು. ಭಾವಿ ಸಂಶೋಧಕರಿಗೆ ಬಿಟ್ಟುಹೋಗಿರುವ ಈ ಸಂಸ್ಥೆ ವಿಶೇಷವಾಗಿ ಭೌತಶಾಸ್ತ್ರದ ಅತ್ಯಂತ ಪ್ರಮುಖ ಸಂಶೋಧನ ಸಂಸ್ಥೆಯಾಗಿದೆ.

**ಗೌರವ, ಪ್ರಶಸ್ತಿಗಳು**

* 'ಫೆಲೋ ಆಫ್‌ರಾಯಲ್ ಸೊಸೈಟಿ ಸದಸ್ಯತ್ವ' (೧೯೨೪)
* 'ನೈಟ್ ಹುಡ್ ಪ್ರಶಸ್ತಿ' (೧೯೨೯)
* 'ನೋಬೆಲ್ ಪ್ರಶಸ್ತಿ (೧೯೩೦)
* 'ಮೈಸೂರು ಮಹಾರಾಜ' ರಿಂದ, 'ರಾಜ ಸಭಾ ಭೂಷಣಗೌರವ' (೧೯೩೫)
* 'ಭಾರತರತ್ನ ಪ್ರಶಸ್ತಿ (೧೯೫೪)

**ಮರಣ**

ನವೆಂಬರ್ ೨೧ ೧೯೭೦.



ದಿನಾಂಕ ೧೭ನೇ ಅಕ್ಟೋಬರ್ ೨೦೧೮ ರಂದು ಬಿಎಂ.ಶ್ರೀ ಪ್ರತಿಷ್ಠಾನದಲ್ಲಿ ನಡೆದ ಆಯುಧ ಪೂಜಾ ಸಮಾರಂಭದಲ್ಲಿ ಸಂಭ್ರಮಿಸುತ್ತಿರುವ ಆಡಳಿತ ಮಂಡಲಿ ಹಾಗೂ ಸಿಬ್ಬಂದಿ ವರ್ಗ.

## ಎದೆಯಾಳದ ಚಿತ್ರಗಳು

ಲೇಖಕಿ ಎನ್. ಅಂಬಿಕೆಯವರ 'ಎದೆಯಾಳದ ಚಿತ್ರಗಳು' ಪುಸ್ತಕವು ೧೩ ಲೇಖನಗಳಿಂದ ಕೂಡಿದೆ. ಪುಸ್ತಕದ ಹೆಸರೇ ಹೇಳುವಂತೆ. ಅವರ ಹೃದಯಕ್ಕೆ ಹತ್ತಿರವಾದ ಕೆಲವು ವಿಷಯಗಳನ್ನು ಆರಿಸಿಕೊಂಡು ಆತ್ಮೀಯವಾಗಿ ಬರೆದಿದ್ದಾರೆ. ಚಿಂತನ ಪರವಾದ ಪರಿಚಯಾತ್ಮಕವಾದ ಲೇಖನಗಳು ಇಲ್ಲಿವೆ.

ಮೊದಲನೆಯ 'ಕನ್ಯಾನದ ಭಾರತ ಸೇವಾಶ್ರಮ' ಲೇಖನವು ಮನಮುಟ್ಟುವಂತಿದೆ. ದೂರದ ಬಂಗಾಳದಿಂದ ಬಂದ ಶ್ರೀಭಟ್ಟಾಚಾರ್ಯ ಅವರ ಸ್ವಾರ್ಥರಹಿತವಾದ ಸೇವೆಯನ್ನು ಹೃದಯಂಗಮವಾಗಿ ಲೇಖಕಿ ಚಿತ್ರಿಸಿದ್ದಾರೆ. ಕನ್ನಡ ಭಾಷೆಯೂ ಬರೆದ ಅವರು ಕನ್ಯಾನದಂತಹ ಸಣ್ಣ ಗ್ರಾಮದಲ್ಲಿ ಇಡೀ ಸಂಸಾರವೇ ಸೇವೆಯಲ್ಲಿ ತೊಡಗಿಕೊಂಡಿರುವುದನ್ನು ವಿವರಿಸಿದ್ದಾರೆ. ಜಾತಿ, ಮತ ಭೇದವಿಲ್ಲದೆ ಅನಾಥ ಮಕ್ಕಳು, ವೃದ್ಧರು ಇಲ್ಲಿ ಆಶ್ರಯ ಪಡೆದಿರುವುದು. ಊರ ಜನರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಆಶ್ರಮವು ದೊಡ್ಡದಾಗಿ ಬೆಳೆಯಲು ಅವರ ಸೇವಾಭಾವವೇ ಕಾರಣ ಎಂಬುದನ್ನು ವಿವರಿಸಿದ್ದಾರೆ.

ಮತ್ತೊಂದು ಲೇಖನ "ಶ್ರೀಪರಮಹಂಸ ಯೋಗಾನಂದರ ಪ್ರವಚನಗಳ ಕನ್ನಡ ಅನುವಾದ." ಈ ಲೇಖನಗಳು ತಿಳಿಯಾಗಿ ಓದಿಸಿಕೊಂಡು ಹೋಗುತ್ತದೆ. ಲೌಕಿಕದಲ್ಲೇ ಮುಳುಗಿರುವವರಿಗೆ ಎಚ್ಚರಿಸುವಂತಹ ಮಾತುಗಳಿವೆ. ಸರಳವಾಗಿ ಹೇಳಿರುವ ಇವು ಭಗವತ್ ಚಿಂತನೆಗೆ ಹಾದಿಯನ್ನು ತೋರುತ್ತವೆ. ಕಠಿಣವಾದ ನಿಯಮಗಳಿಲ್ಲದ, ನೇರವಾದ ಅನುಸರಿಸಲು ಯೋಗ್ಯವಾದ ಪ್ರವಚನಗಳಿವು.

ಲೇಖಕಿಯ ಸೋದರ ಮಾವ ಚಕ್ರಕೋಡಿ ನಾರಾಯಣ ಶಾಸ್ತ್ರಿಗಳು. ಅವರ ವಿದ್ಯಾಭ್ಯಾಸ, ಸಂಗೀತ ಕಲಿಕೆ ಅವರ ವಿದ್ವತ್ತಿನ ಪರಿಚಯವನ್ನು ಲೇಖಕಿ ಮಾಡಿಕೊಟ್ಟಿದ್ದಾರೆ. ಸಹಜವಾಗಿಯೇ ಆತ್ಮೀಯತೆಯಿಂದ ಅವರ ಎಲ್ಲ ಸಾಧನೆಗಳನ್ನು ನಿರೂಪಿಸಿದ್ದಾರೆ. ಜೀವನದಲ್ಲಿ ಅವರು ಪಟ್ಟ ಕಷ್ಟ, ಸಂಸಾರ ಜೀವನ ಅವರ ಸಂಗೀತ ಸಾಧನೆ, ರಮಣ ಮಹರ್ಷಿಗಳ ಮೇಲಿನ ಭಕ್ತಿ ಎಲ್ಲವೂ ಹೃದಯಂಗಮವಾಗಿ ಚಿತ್ರಿತವಾಗಿದೆ.

ಮತ್ತೊಂದು ಕಡವ ಶಂಭುಶರ್ಮರ ಜೀವನ ಚರಿತ್ರೆಯಲ್ಲಿ ಅವರು ಸರ್ಕಾರಿ ಶಾಲೆಯಲ್ಲಿ ಅಧ್ಯಾಪಕರಾಗಿ ಸಾಹಿತ್ಯದೊಂದಿಗೆ ಆಯುರ್ವೇದ, ಗಾಂಧೀತತ್ವ ಪ್ರಚಾರ, ಹರಿಜನೋದ್ಧಾರದ ಕೆಲಸ ಮಾಡಿದ ಬಗ್ಗೆ ಬರೆದಿದ್ದಾರೆ. ಶಂಭುಶರ್ಮರು ಹಲವಾರು ಗ್ರಂಥಗಳನ್ನು ಅನುವಾದ ಮಾಡಿದ್ದಾರೆಂದು ಹೇಳಿದ್ದಾರೆ. ಕೊನೆಯಲ್ಲಿ ಅವರ ಗ್ರಂಥಗಳ ಪಟ್ಟಿಯನ್ನು ಕೊಟ್ಟಿರುವುದು ಉಪಯುಕ್ತವಾಗಿದೆ.

'ಮಹಿಳೆಯರ ಕಾವ್ಯಪ್ರಜ್ಞೆ'ಯನ್ನು ಕುರಿತ ಅವರ ವಿಚಾರಲಹರಿ ಆಲೋಚನಾ ಪರವಾಗಿದೆ. ಹೀಗೆ ಸಮಾಜದ ಹಲವಾರು ವಿಷಯಗಳೆಡೆಗೆ ಗಮನ ಹರಿಸಿ, ಲೇಖಕಿಯು ಅದರ ಬಗೆಗೆ ಚಿಂತನ ಮಂಥನ ಮಾಡಿರುವುದು ಕಂಡುಬರುತ್ತದೆ. ಈ ಕೃತಿಯನ್ನು ಹೈಸ್ಕೂಲು, ಕಾಲೇಜು ವಿದ್ಯಾರ್ಥಿಗಳು ಮಾರ್ಗದರ್ಶನ ಪಡೆಯಬಹುದು. ಇಂದಿನ ಯುವಜನಕ್ಕೆ ಇಂತಹ ಆಲೋಚನೆಗಳು, ವಿಚಾರಗಳು ಅಗತ್ಯವಾಗಿ ಬೇಕಾಗುತ್ತದೆ.

**ಡಾ. ನಳಿನಿ ವೆಂಕಟೇಶ್**
ಬೆಂಗಳೂರು

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2018-2020
dt. 27-10-2017
Office of Posting: Bangalore PSO, Bangalore 560026
Price :Annual Subscription Rs. 20/-
Date of publishing and Posting : 30-10-2018

## ಹಸ್ತಪ್ರತಿ ವಿಭಾಗದ ಮತ್ತು ಗ್ರಂಥಾಲಯ ವಿಭಾಗದ ವರದಿ

ಬೆಂಗಳೂರಿನ ಆಚಾರ್ಯ ಪಾಠಶಾಲೆಯ ಪದವಿ ಪೂರ್ವ ಕಾಲೇಜು, ಇತಿಹಾಸ ವಿಭಾಗವು "ಸನಾತನ ೨೦೧೮" ಎಂಬ ಕಾರ್ಯಕ್ರಮದ ಅಡಿಯಲ್ಲಿ ಹಸ್ತಪ್ರತಿಗಳ ಮತ್ತು ನಾಣ್ಯಗಳ ಪ್ರದರ್ಶನವನ್ನು ಕಾಲೇಜು ವಿದ್ಯಾರ್ಥಿಗಳಿಗಾಗಿ ದಿನಾಂಕ ೨೫ನೇ ಸೆಪ್ಟೆಂಬರ್ ೨೦೧೮ರಂದು ಅವರ ಕಾಲೇಜಿನ ಆವರಣದಲ್ಲಿ ಆಯೋಜಿಸಿದ್ದರು. ಪ್ರತಿಷ್ಠಾನದ ಹಸ್ತಪ್ರತಿ ವಿಭಾಗವು ವಿವಿಧ ಭಾಷೆ ಮತ್ತು ಲಿಪಿಗಳ ತಾಳೆಗರಿಗಳ ಗ್ರಂಥಗಳನ್ನು', ಬೂರ್ಜಪತ್ರದ ಮಾದರಿ, ಸಂಚೀಪತ್ರದ ಮಾದರಿ, ವಿವಿಧ ಕಾಗದಗಳ ಹಸ್ತಪ್ರತಿಗಳನ್ನು 'ಕಡತದ ಮಾದರಿ, ಸಂರಕ್ಷಣಾ ಸಾಧನೆಗಳನ್ನು ಮೈಕ್ರೋ ಫಿಲ್ಮ್ ಮತ್ತು ಕೊರೆಯುವ ಸಾಧನೆಗಳ ಪ್ರದರ್ಶನವನ್ನು ಏರ್ಪಡಿಸಿತ್ತು. ಈ ವಿಷಯಕ್ಕೆ ಸಂಬಂಧಿಸಿದ ಕೆಲವು ಪ್ರತಿಷ್ಠಾನದ ಪ್ರಕಟಣೆಗಳನ್ನೂ ಪದರ್ಶಿಸಲಾಯಿತು. ಕಾಲೇಜಿನ ಪ್ರಾಂಶುಪಾಲರಾದ ಡಾ.ಎಸ್.ಅನಿಲ್ ಕುಮಾರ್ ಮತ್ತು ಶ್ರೀಮತಿ. ಎಸ್. ಹೇಮಾವತಿ, ಇತಿಹಾಸ ವಿಭಾಗದ ಮುಖ್ಯಸ್ಥೆ, ಈ ಪ್ರದರ್ಶನವನ್ನು ಯಶಸ್ವಿಯಾಗಿ ಆಯೋಜಿಸಿದ್ದರು. ಶ್ರೀ ಗುರುಪ್ರಸಾದ್.ಬಿ.ಎಸ್. ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದ ಸಂಯೋಜನಾಧಿಕಾರಿಗಳು ಪ್ರದರ್ಶನವನ್ನು ನಡೆಸಿಕೊಟ್ಟರು.

ನಮ್ಮ ಹಸ್ತಪ್ರತಿ ಸಂಗ್ರಹಾಲಯಕ್ಕೆ ಮೂರು ತಾಳೆಗರಿ ಗ್ರಂಥಗಳನ್ನು ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ, ಬೆಂಗಳೂರು, ಇವರು ನೀಡಿದ್ದಾರೆ. ಈ ಗ್ರಂಥಗಳ ಸಂರಕ್ಷಣಾ ಕಾರ್ಯ ಪ್ರಾರಂಭವಾಗಿದ್ದು, ಸಂಪೂರ್ಣವಾದ ನಂತರ, ಹೆಚ್ಚಿನ ವಿವರಗಳನ್ನು ಪ್ರಕಟಿಸಲಾಗುವುದು.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ–ಅಂಚೆ

ಶ್ರೀಮತಿ/ಶ್ರೀ.......................................................................................

.......................................................................................

.......................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭